ಜಿ. ಎನ್. ಶೇಟ್

# ಕದಂಬರ ಕಾಲದ ಪೆಟ್ಟಿಗೆತಲೆಕಟ್ಟಿನ ಲಿಪಿ : ಕೆಲವು ವಿಚಾರಗಳು

ಕ್ರಿಸ್ತಶಕ ಮೂರನೇ ಶತಮಾನದಿಂದ ಏಳನೇ ಶತಮಾನದವರೆಗಿನ ಬನವಾಸಿಯ ಕದಂಬರ ಆಳ್ವಿಕೆಯು, ಕರ್ನಾಟಕ ಇತಿಹಾಸವನ್ನು ನಿರ್ಧರಿಸುವುದರಲ್ಲಿ ಪ್ರಮುಖ ಪಾತ್ರವಹಿಸಿದೆ. ಇವರು ಶಾತವಾಹನರ ಪ್ರಾಬಲ್ಯ ಮತ್ತು ವೈಭವಗಳ ಉತ್ತರಾಧಿಕಾರಿಗಳಾಗಿ ಅಧಿಕಾರಕ್ಕೆ ಬಂದವರು. ಈ ಕದಂಬರ ಆಳ್ವಿಕೆಯಲ್ಲಿ ಕರ್ನಾಟಕದ ಸಂಸ್ಕೃತಿಯು ಒಂದು ಹೊಸ ಮೈಲಿಗಲ್ಲನ್ನು ಸ್ಥಾಪಿಸಿತು. ಇವರು ರಾಜಕೀಯವಾಗಿ ಬಲಿಷ್ಠರಾದಾಗ ದಕ್ಷಿಣದಲ್ಲಿ ಪಲ್ಲವ ಮತ್ತು ಗಂಗರೂ ಉತ್ತರದಲ್ಲಿ ವಾಕಾಟಕರೂ ಸಮಕಾಲೀನರಾಗಿದ್ದು, ಇವರೊಂದಿಗೆ ಸ್ನೇಹದಿಂದಿದ್ದರು. ಈ ಸ್ನೇಹವು ವಾಕಾಟಕ ಮತ್ತು ಗುಪ್ತರೊಡನೆ ಬೆಳೆಸಿದ ವೈವಾಹಿಕ ಸಂಬಂಧದಿಂದ ಮತ್ತಷ್ಟು ಬಲಗೊಂಡಿತು. ಸಾಂಸ್ಕೃತಿಕ ಚರಿತ್ರೆಗೂ ಕದಂಬರು ತಮ್ಮದೇ ಕೊಡುಗೆ ನೀಡಿರುತ್ತಾರೆ.

ಕದಂಬರ ಶಾಸನಗಳ ವೈಶಿಷ್ಟ್ಯವೆಂದರೆ, ಪೆಟ್ಟಿಗೆ ತಲೆಕಟ್ಟಿನ ಲಿಪಿಗಳ ಬಳಕೆ. ಕದಂಬರ ಶಾಸನಗಳಲ್ಲಿಯ ಅಕ್ಷರಗಳು ತಲೆಯ ಮೇಲೆ ಪೆಟ್ಟಿಗೆಯನ್ನು ಹೋಲುವ ಚೌಕಾಕಾರವನ್ನು ಹೊಂದಿರುವುದರಿಂದ ಇವನ್ನು ಪೆಟ್ಟಿಗೆ ತಲೆಕಟ್ಟಿನ ಲಿಪಿಗಳೆಂದು ಕರೆಯುತ್ತಾರೆ. ಈ ಲಿಪಿಗಳು ಇವರ ಸಮಕಾಲೀನರಾದ ವಾಕಾಟಕರ ಮತ್ತು ಮಧ್ಯ ಭಾರತದ, ಅದರಲ್ಲೂ ಮುಖ್ಯವಾಗಿ ಮಧ್ಯಪ್ರದೇಶದ ಅಕ್ಷರಗಳ ಲಕ್ಷಣಗಳನ್ನು ಹೊಂದಿವೆ. ವಾಕಾಟಕ ಮತ್ತು ಕದಂಬರ ಶಾಸನಗಳಲ್ಲಿಯ ಪೇಟಿಕಾಶಿರದ ಅಕ್ಷರಗಳಲ್ಲಿಯೂ ಪೆಟ್ಟಿಗೆಯ ಒಳಭಾಗವನ್ನು ಕೆತ್ತಿ ಆಳ ಮಾಡಿದ್ದರೆ, ವಾಕಾಟಕರ ಬರಹದಲ್ಲಿ ಗೆರೆಗಳಲ್ಲಿ ಮಾತ್ರವೇ ಪೆಟ್ಟಿಗೆಯನ್ನು ತೋರಿಸಿರುತ್ತಾರೆ. ಈ ಹೊಸ ಬಗೆಯ ಪೇಟಿಕಾಶಿರದ ಅಕ್ಷರಗಳನ್ನು ಯಾರು ಅನ್ವೇಷಿಸಿದರು ಅಥವಾ ಯಾರು ಯಾರಿಂದ ಸ್ವೀಕರಿಸಿದರೆಂಬ ಪ್ರಶ್ನೆಗೆ ಉತ್ತರ ಹುಡುಕುವುದು ಕಷ್ಟ.

ಆದಾಗ್ಯೂ ಪೇಟಿಕಾಶಿರದ ಅಕ್ಷರ ಹೇಗೆ ರೂಢಿಗೆ ಬಂದಿತೆಂಬ ಪ್ರಶ್ನೆಯ ಕಡೆಗೆ ನಾವು ಮೊದಲು ಗಮನ ಹರಿಸೋಣ. ಸಾಹಿತ್ಯಕ ಅಥವಾ ಇತರೆ ಬರವಣಿಗೆಗಳಿಗೆ ಈ ಲಿಪಿಯನ್ನು ವಿಪುಲವಾಗಿ ಬಳಸತೊಡಗಿದ್ದುದರಿಂದ ಈ ಲಿಪಿಯ ಬೆಳವಣಿಗೆಗೆ ಹೆಚ್ಚಿನ ಕೊಡುಗೆ ನೀಡಿದಂತಾಗಿದೆ. ಭೂರ್ಜಪತ್ರ ಅಥವಾ ಬಟ್ಟೆಯ ಮೇಲೆ ಮಸಿಯಂತಹ ದ್ರವದಿಂದ ಬರೆದಾಗ ಯಾವುದೇ ಅಕ್ಷರದ ಆರಂಭದ ಭಾಗವು ದಟ್ಟವಾಗಿರುವುದುಂಟು. ಹೀಗೆ ದಟ್ಟವಾಗಿ ಬಣ್ಣ ಅಥವಾ ಮಸಿಬಿದ್ದ ಅಕ್ಷರಭಾಗಗಳನ್ನು ಆಕಸ್ಮಿಕವೆಂಬಂತೆ ಭಾವಿಸದೆ ಅನುಕರಣೆ ಮಾಡಿದುದರಿಂದ ಮುಂದೆ ಬುದ್ಧಿಪೂರ್ವಕವಾಗಿ ಅಕ್ಷರದ ಮೇಲ್ಭಾಗವನ್ನು ದಟ್ಟವಾಗಿಸಿದರು. ಬಹುಶಃ ಈ ಕಾರಣದಿಂದಲೇ ಶಾತವಾಹನರ ಕಾಲದ ಅಕ್ಷರಗಳಲ್ಲಿ ತ್ರಿಕೋನಾಕಾರದ ತಲೆಕಟ್ಟು ರೂಢಿಗೆ ಬಂದಿತು. ಇದರ ಮುಂದಿನ ವಿಸ್ತರಣೆಯಾಗಿ ಅಕ್ಷರದ ಮೇಲ್ಭಾಗಗಳನ್ನು ಅತಿಶಯವಾಗಿ ತಿದ್ದಿದುದರ ಪರಿಣಾಮವಾಗಿ ಪೇಟಿಕಾಶಿರದ ಅಕ್ಷರಗಳ ಮೂಡುವಿಕೆಗೆ ಕಾರಣವಾಯಿತು. ಇದು ನಿಜವಾದಲ್ಲಿ, ಮಧ್ಯಭಾರತದ ಭಾಗದಲ್ಲಿಯೇ ಪೇಟಿಕಾಶಿರದ ಮೂಲವನ್ನು ಹುಡುಕಬಹುದಾಗಿದೆ. ಸಾಮಾನ್ಯವಾಗಿ ದಕ್ಷಿಣದಲ್ಲಿ ಬರವಣಿಗೆಯ ಮಾಧ್ಯಮವಾಗಿ ತಾಡಪತ್ರದ ಮೇಲೆ ಮೊನಚಾದ ಕಂಠದಿಂದ ಕೊರೆಯುತ್ತಿದ್ದರು. ಆದರೆ

ಉತ್ತರದಲ್ಲಿ ಮಸಿಯಲ್ಲಿ ಬರೆಯುತ್ತಿದ್ದುದನ್ನು ಗುಪ್ತರ ಕಾಲದ ಬೋವರ್ ಹಸ್ತಪ್ರತಿಯಲ್ಲಿಯೇ ಕಾಣಬಹುದಾಗಿದೆ. ಆದ್ದರಿಂದ ಪೇಟಿಕಾಶಿರದ ಲಿಪಿ ಇಂತಹ ಕಡೆಯೇ ಉದಿಸಿತೆಂಬುದನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗದಿದ್ದರೂ ಅದು ಉತ್ತರಭಾರತದಲ್ಲಿ ಉದಿಸಿರಬಹುದು. ಮುಂದೆ ಇದು ದಕ್ಷಿಣದಲ್ಲಿ ಸೌಂದರ್ಯೀಕರಣಗೊಂಡು ಬಳಕೆಗೆ ಬಂದಿತು.

ಅ ಕ ರ ಥ ಬ ಪ ವ ಮ ಲ

ಕದಂಬ ಶಾಂತಿವರ್ಮನ ತಾಳಗುಂದಶಾಸನ, ಮೃಗೇಶವರ್ಮನ ಬನವಾಸಿ ಶಾಸನ ಮತ್ತು ರವಿವರ್ಮನ ಗುಡ್ನಾಪುರ ಶಾಸನಗಳಲ್ಲಿ ನಾವು ಲಿಪಿವೈಶಿಷ್ಟ್ಯದ ಗಹನತೆ ಮತ್ತು ಕಲಾತ್ಮಕ ಬರವಣಿಗೆಯನ್ನು ಕಾಣಬಹುದಾಗಿದೆ. 'ಅ', 'ಕ', 'ರ' ಅಕ್ಷರಗಳಲ್ಲಿ ಕೆಳಮುಖವಾಗಿ ಬೆಳೆದ ಗೆರೆಗಳು ಮೇಲ್ಮುಖವಾಗಿ ತಿರುಗಿರುವ ಲಕ್ಷಣಗಳನ್ನು ಕಾಣಬಹುದಾಗಿದೆ. 'ಬ' ಮತ್ತು 'ಪ'ಗಳಲ್ಲಿ ಎಡಗಡೆಯ ಗೆರೆಯು ಮಧ್ಯದಲ್ಲಿ ಬಾಗಿದೆ. 'ಥ' ಅಕ್ಷರವು ಕೇವಲ ವೃತ್ತಾಕಾರದಲ್ಲಿರದೆ ಚಪ್ಪಟೆ ತಳವನ್ನು ಹೊಂದಿ ಉದ್ದಕ್ಕೆ ಬೆಳೆದು ಮಧ್ಯದಲ್ಲಿ ಕಚ್ಚಿನಂತಹ ಚುಕ್ಕೆಯನ್ನು ಹೊಂದಿದೆ. 'ವ' ಮತ್ತು 'ಮ' ಅಕ್ಷರಗಳ ವೃತ್ತಾಕಾರವು ತಳಗಡೆ ಬಾಗಿದ ಗೆರೆಯನ್ನು ಹೊಂದಿದ್ದು, ಬಲಗಡೆಯಿಂದ ಮೇಲಕ್ಕೇರಿ ಪೇಟಿಕಾಶಿರದ ಅಲಂಕಾರದಿಂದ ಕೂಡಿದೆ. 'ಲ'ಕಾರದ ಬಲಭಾಗದ ಗೆರೆಯು ಮೇಲೇರಿ ಅಕ್ಷರದ ಕೆಳಭಾಗವನ್ನು ಮುಟ್ಟುವಷ್ಟು ಬಾಗಿದೆ. ಕದಂಬರ ಶಾಸನಗಳು ಇಂತಹ ಲಿಪಿ ಬದಲಾವಣೆಗಳಿಗೆ ಉತ್ತಮ ಉದಾಹರಣೆಗಳಾಗಿವೆ.

ಕದಂಬರ ಶಾಸನಗಳನ್ನು ಪರೀಕ್ಷಿಸಿದರೆ, ನಿಧಾನವಾಗಿಯಾದರೂ ಲಿಪಿಗಳು ವಿಕಾಸ ಹೊಂದಿರುವುದನ್ನು ಕಾಣಬಹುದು. ಪೇಟಿಕಾಶಿರದ ಲಿಪಿಗಳ ಕಾರಣದಿಂದಲೇ ಈ ಬೆಳವಣಿಗೆಯಾಯಿತೆಂದು ನಿರ್ಧರಿಸುವುದು ಕಷ್ಟ. ಏಕೆಂದರೆ ಪೇಟಿಕಾಶಿರದ ಲಿಪಿಯನ್ನು ಬಳಸಿರುವ ಕದಂಬರ ಶಾಸನಗಳು ೫೫ ರಿಂದ ೬೦ರವರೆಗೆ ಮಾತ್ರ ದೊರೆತಿವೆ. ಆದರೆ ಶಿಲಾಶಾಸನಗಳಲ್ಲಿ ಕಂಡುಬರುವ ಪೆಟ್ಟಿಗೆಯಾಕಾರದ ಲಿಪಿಗಳು ಲಿಪಿವಿನ್ಯಾಸವನ್ನು ನಿರ್ಧರಿಸಲು ಖಂಡಿತವಾಗಿಯೂ ಸಹಾಯಕವಾಗಿವೆ. ಇಂತಹ ಸುಂದರ ಬರವಣಿಗೆಯು ತೆಗೆದುಕೊಂಡಿರುವ ಕಾಲವನ್ನು ಗಣನೆಗೆ ತೆಗೆದುಕೊಂಡರೆ, ಸಾಮಾನ್ಯ ಉದ್ದೇಶಗಳಿಗೆ, ದೈನಂದಿನ ರಾಜ್ಯಾಡಳಿತದ ದಾಖಲೆಗಳು, ಕಾವ್ಯ, ನಾಟಕ ಇತ್ಯಾದಿ ಕಾವ್ಯಾತ್ಮಕವಾದ ಹಸ್ತಪ್ರತಿಗಳನ್ನು ನಕಲುಮಾಡುವುದು ಮುಂತಾದ ಕೆಲಸಗಳಲ್ಲಿ ಸಾಮಾನ್ಯವಾಗಿ ಇದೇ ಲಿಪಿಯನ್ನು ಬಳಸುತ್ತಿದ್ದರೆಂದು ಭಾವಿಸಲಾಗದು. ಇದಕ್ಕೆ ಭಿನ್ನವಾಗಿ, ಇದರೊಂದಿಗೇ ಸಾಮಾನ್ಯ ಬರವಣಿಗೆಗಾಗಿ ಒರಟು ರೀತಿಯ ಬರವಣಿಗೆಯೂ ಬಳಕೆಯಲ್ಲಿದ್ದು, ಅದು ಸಹಾ ಆ ಕಾಲದ ಲಿಪಿಯ ಬದಲಾವಣೆಗೆ ಸಾಕಷ್ಟು ಕೊಡುಗೆಯನ್ನು ನೀಡಿದೆಯೆನ್ನಬಹುದು. ಈ ಎಲ್ಲಾ ಬದಲಾವಣೆಗಳು ಕದಂಬರ ಪೇಟಿಕಾಶಿರದ ಲಿಪಿಗಳಲ್ಲಿ ಎದ್ದು ಕಾಣುತ್ತವೆ.

ಒಟ್ಟಿನಲ್ಲಿ, ಮೇಲಿನ ಚರ್ಚೆಯಿಂದ ಈ ಕೆಳಗಿನಂತೆ ಎರಡು ಗಮನಾರ್ಹ ಅಂಶಗಳನ್ನು ಪ್ರಸ್ತಾಪಿಸಬಹುದು:

ಅ) ಪೇಟಿಕಾಶಿರದ ಲಿಪಿಗಳು ಬಹುಶಃ ಭಾರತದ ಯಾವುದೋ ಭಾಗದಲ್ಲಿ ಉದಯಿಸಿ ವಾಕಾಟಕ ಮತ್ತು ಕದಂಬರ ಆಶ್ರಯದಲ್ಲಿ ದಕ್ಷಿಣದಲ್ಲಿ ಬಳಕೆಗೆ ಬಂದವು.

ಆ) ಕರ್ನಾಟಕದ ಲಿಪಿ ಬೆಳವಣಿಗೆಯಲ್ಲಿ ಈ ಪೇಟಿಕಾ ಶಿರದ ಲಿಪಿಯ ಯಾವ ಕೊಡುಗೆಯೂ ಇಲ್ಲ. ಕದಂಬರ ಕಾಲದ ಶಾಸನಗಳಲ್ಲಿ ಗಮನಿಸಲಾದ ಬದಲಾವಣೆಗಳು ಸಾಮಾನ್ಯ ಬಳಕೆಗಾಗಿ ಉಪಯೋಗಿಸಿದ ಒರಟು ಲಿಪಿಯಲ್ಲಿ ಉಂಟಾದ ಬದಲಾವಣೆಗಳ ಲಕ್ಷಣಗಳನ್ನು ಪ್ರತಿಫಲಿಸುತ್ತವೆ.*

(ಕನ್ನಡಾನುವಾದ/ದೇವರಕೊಂಡಾರೆಡ್ಡಿ)

## ಆಧಾರ ಗ್ರಂಥಗಳು


1. Srinivas Ritti, B. R. Gopal (Ed.) : *Studies in Indian History*, (Dr P. B. Desai Felicitation Volume)
2. K. V. Ramesh (Ed.) : *Srikanthika* (Dr. Srikantha Sastri Felicitation Volume)
3. B. R. Gopal : *Corpus Inseriptions of Kadambas*
4. *Epigraphia Indica* (Relevant Volumes)
5. *Indian Antiquary* (Relevant Volumes)



* ಈ ಲೇಖನ ಬರೆಯಲು ಪ್ರೋತ್ಸಾಹ ಮತ್ತು ಸಹಕಾರಗಳನ್ನು ನೀಡಿದ ಡಾ॥ ಎಚ್. ಎಸ್. ರಿತ್ತಿ (ಮಾರ್ಗದರ್ಶಕರು), ಡಾ॥ ಎಸ್. ವಿ. ಪಾಡಿಗಾರ್ ಮತ್ತು ಡಾ॥ ಎಚ್. ಆರ್. ರಘುನಾಥಭಟ್ ಅವರುಗಳಿಗೆ ಋಣಿಯಾಗಿದ್ದೇನೆ.